**On verification, if the information so furnished by the applicant in the application is found to be false, then their candidature is liable for rejection and also they are liable for Criminal Prosecution for furnishing false information.**

(l) The candidate shall furnish two character certificates of good character (one from the Principal of the Institution/College in which he/she has last studied with study details and another from a respectable person not being a relative who is well acquainted with him/her.

**BY ORDER,**

**B.A. PATIL**

SECRETARY

CIVIL JUDGES RECRUITMENT COMMITTEE

HIGH COURT OF KARNATAKA

BENGALURU-560 001


# ವಿಶೇಷ ರಾಜ್ಯ ಪತ್ರಿಕೆ

| | | |
|---|---|---|
| ಭಾಗ – V | ಬೆಂಗಳೂರು, ಸೋಮವಾರ, ಮಾರ್ಚ್ ೧೬, ೨೦೧೫ (ಫಾಲ್ಗುಣ ೨೫, ಶಕ ವರ್ಷ ೧೯೩೬) | ನಂ. ೨೧೮ |
| **Part – V** | **Bengaluru, Monday, March 16, 2015 (Phalguna 25, Shaka Varsha 1936)** | **No. 218** |


**ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ**

**ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು–560 001**

**ಅಧಿಸೂಚನೆ**

**ಸಂಖ್ಯೆಃ ಕರಾಆಃಆಡಳಿತಃ27ಃ2015, ದಿನಾಂಕಃ 12.03.2015**

**ವಿಷಯಃ–** ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಖಾಲಿ ಇರುವ ನ್ಯಾಯಾಂಗ ವೃಂದದ ಒಂದು ಸದಸ್ಯರ ಹುದ್ದೆಯನ್ನು ಭರ್ತಿ ಮಾಡಲು ಅರ್ಜಿಯನ್ನು ಆಹ್ವಾನಿಸುವ ಬಗ್ಗೆ.

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ಖಾಲಿ ಇರುವ ನ್ಯಾಯಾಂಗ ವೃಂದದ ಒಂದು ಸದಸ್ಯರ ಸ್ಥಾನಕ್ಕೆ ಸೂಕ್ತರಾದವರನ್ನು ಆಯ್ಕೆ ಮಾಡುವ ಸಲುವಾಗಿ ನಿಗಧಿತ ಅರ್ಜಿ ನಮೂನೆಯಲ್ಲಿ ಅರ್ಜಿಯನ್ನು ಆಹ್ವಾನಿಸಲಾಗಿದೆ.

1. ವಿದ್ಯಾರ್ಹತೆ ಹಾಗೂ ಅನುಭವ

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ನ್ಯಾಯಾಂಗ ವೃಂದದ ಸದಸ್ಯರ ಹುದ್ದೆಗೆ ಅರ್ಹರಾಗಿರುವಂತಹ ಅಭ್ಯರ್ಥಿಯು ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1)(ಬಿ) ರ ಮೊದಲನೇ ಪರಂತುಕ ಹಾಗೂ ಅದರೊಂದಿಗೆ ಓದಿಕೊಳ್ಳುವ ವಿವರಣೆಯ ಅನ್ವಯ ಕನಿಷ್ಠ ಹತ್ತು ವರ್ಷಗಳು ಜಿಲ್ಲಾ ಮಟ್ಟದ ನ್ಯಾಯಾಂಗ ಅಥವಾ ಟ್ರಿಬ್ಯೂನಲ್‌ಗೆ ಸರಿಸಮಾನವಾದ ನ್ಯಾಯಾಲಯದಲ್ಲಿ ಪೀಠಾಧಿಕಾರಿಗಳಾಗಿ ಸೇವೆಸಲ್ಲಿಸಿದವರು ಅಥವಾ ಜಿಲ್ಲಾ ನ್ಯಾಯಾಧೀಶರಾಗಿ ಸೇವೆ ಸಲ್ಲಿಸಿದವರು ಅರ್ಜಿ ಸಲ್ಲಿಸಲು ಅರ್ಹರಾಗಿರುತ್ತಾರೆ.

2. ಸೇವಾವಧಿ

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ನ್ಯಾಯಾಂಗ ವೃಂದದ ಸದಸ್ಯರ ಸೇವಾವಧಿಯು 5 ವರ್ಷ ಅಥವಾ 67 ವರ್ಷ ವಯಸ್ಸು ಪೂರ್ಣವಾಗುವವರೆಗೆ ಇವೆರಡರಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ.

3. ವೇತನ ಮತ್ತು ಭತ್ಯೆಗಳು

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ನ್ಯಾಯಾಂಗ ವೃಂದದ ಸದಸ್ಯರಾಗಿ ಆಯ್ಕೆಯಾದವರು ಪ್ರತಿ ತಿಂಗಳಿಗೆ ರೂ.30,000/–ಗಳ ಗೌರವಧನ ಮತ್ತು ರೂ. 3,000/–ಗಳ ಪ್ರಯಾಣ ಭತ್ಯೆ ಪಡೆಯಲು ಅರ್ಹರಿರುತ್ತಾರೆ ಹಾಗೂ ಸರ್ಕಾರದಿಂದ ಕಾಲಕಾಲಕ್ಕೆ ಪರಿಷ್ಕರಿಸಿ ಹೊರಡಿಸುವ ಆದೇಶಗಳು ಅನ್ವಯವಾಗುತ್ತವೆ.

4. ಆಯ್ಕೆ ವಿಧಾನ

ಗ್ರಾಹಕ ಸಂರಕ್ಷಣಾ ಕಾಯ್ದೆ 1986ರ ಕಲಂ 16(1A) ರಡಿಯಲ್ಲಿನ ಆಯ್ಕೆ ಸಮಿತಿಯ ಮೂಲಕ ಅರ್ಹ ಅಭ್ಯರ್ಥಿಯನ್ನು ಆಯ್ಕೆ ಮಾಡಲಾಗುವುದು.

ಅರ್ಜಿ ಸಲ್ಲಿಸಲು ಇಚ್ಚಿಸುವಂತಹ ಅರ್ಹ ಅಭ್ಯರ್ಥಿಗಳು ನಿಗಧಿತ ಅರ್ಜಿ ನಮೂನೆಯಲ್ಲಿ ಪೂರ್ಣವಾಗಿ ವಿವರಗಳನ್ನು ಭರ್ತಿ ಮಾಡಿ, ಜನ್ಮ ದಿನಾಂಕ, ವಿದ್ಯಾರ್ಹತೆ ಹಾಗೂ ಅನುಭವಕ್ಕೆ ಸಂಬಂಧಪಟ್ಟ ಅಗತ್ಯ ದಾಖಲೆಗಳ ದೃಢೀಕೃತ ಪ್ರತಿಗಳನ್ನು ಹಾಗೂ ರೂ.100/–ಗಳ ಭಾರತೀಯ ಪೋಸ್ಟಲ್ ಆರ್ಡರ್/ಡಿ.ಡಿ.ಯನ್ನು ಅಧ್ಯಕ್ಷರು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಬೆಂಗಳೂರು, ಇವರ ಹೆಸರಿನಲ್ಲಿ ಪಡೆದು

R.N.I. No. KARBIL/2001/47147 POSTAL REGN. No. RNP/KA/BGS/2202/2014-16
Licensed to post without prepayment **WPP No. 297**



ಅರ್ಜಿಯಲ್ಲಿ ಶುಲ್ಕದ ವಿವರಗಳನ್ನು ಬರೆದು ಅರ್ಜಿಯೊಂದಿಗೆ ಲಗತ್ತಿಸಿ **ದಿನಾಂಕ:05.05.2015 ರ ಸಂಜೆ 5–00 ಘಂಟೆಯೊಳಗಾಗಿ ರಿಜಿಸ್ಟ್ರಾರ್ ಮತ್ತು ಆಡಳಿತಾಧಿಕಾರಿ, ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ, ಬಸವ ಭವನ, ಹೈ ಗ್ರೌಂಡ್ಸ್, ಬೆಂಗಳೂರು 560001 ಇವರಿಗೆ ತಲುಪುವಂತೆ ಸಲ್ಲಿಸುವುದು.**

ನಿಗಧಿತ ದಿನಾಂಕ ಹಾಗೂ ಸಮಯದ ನಂತರ ಅಂಚೆ/ಕೊರಿಯರ್ ಮೂಲಕ ಅಥವಾ ನೇರವಾಗಿ ಬರುವಂತಹ ಯಾವುದೇ ಅರ್ಜಿಗಳನ್ನು ಸ್ವೀಕರಿಸಲಾಗುವುದಿಲ್ಲ. ನಿಗಧಿತ ಅರ್ಜಿ ನಮೂನೆಯು ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದ ವೆಬ್‌ಸೈಟ್ http://kscdrc.kar.nic.in ನಲ್ಲಿ ಲಭ್ಯವಿದ್ದು, ಸಂಬಂಧಪಟ್ಟ ಅರ್ಹ ಅಭ್ಯರ್ಥಿಗಳು ವೆಬ್‌ಸೈಟಿನಿಂದ ಅರ್ಜಿ ನಮೂನೆಯನ್ನು ನೇರವಾಗಿ ಪಡೆದುಕೊಳ್ಳಬಹುದಾಗಿದೆ ಅಥವಾ ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗದಲ್ಲಿ ನೇರವಾಗಿ ಪ್ರತಿ ಅರ್ಜಿಗೆ ರೂ.50/–ಗಳ ನಗದನ್ನು ಪಾವತಿ ಮಾಡಿ ಅರ್ಜಿಯನ್ನು ಪಡೆದುಕೊಳ್ಳಬಹುದು.

**ನ್ಯಾಯಮೂರ್ತಿ ಬಿ.ಎಸ್. ಇಂದ್ರಕಲಾ**

ಅಧ್ಯಕ್ಷರು

ಕರ್ನಾಟಕ ರಾಜ್ಯ ಗ್ರಾಹಕರ ವ್ಯಾಜ್ಯಗಳ ಪರಿಹಾರ ಆಯೋಗ

ಬೆಂಗಳೂರು

ಮುದ್ರಕರು ಹಾಗೂ ಪ್ರಕಾಶಕರು:– ಸಂಕಲನಾಧಿಕಾರಿಗಳು, ಕರ್ನಾಟಕ ರಾಜ್ಯಪತ್ರ, ಸರ್ಕಾರಿ ಕೇಂದ್ರ ಮುದ್ರಣಾಲಯ, ಬೆಂಗಳೂರು–59